**ಸರ್ಕಾರದ ಆದೇಶ ಸಂ : ಸನೀಇ 34 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ : 05–05–2010**

ರಾಮನಗರ ಜಿಲ್ಲೆ, ಕನಕಪುರ ತಾಲ್ಲೂಕು ರಾವುತನಹಳ್ಳ ಸಣ್ಣ ನೀರಾವರಿ ಕೆರೆ ನಿರ್ಮಾಣ ಕಾಮಗಾರಿಗಾಗಿ ಸ್ವಾಧೀನಪಡಿಸಿಕೊಳ್ಳಲಾದ (ಹೆಚ್ಚುವರಿ ವಿಸ್ತೀರ್ಣ) ದೊಡ್ಡಮರಳವಾಡಿ, ಎಲಚವಾಡಿ, ಕಲ್ಲನಕುಪ್ಪೆ, ಹುಯಲಪ್ಪಹಳ್ಳಿ ಮತ್ತು ಭೀಮಸಂದ್ರ ಗ್ರಾಮಗಳಿಗೆ ಸೇರಿದ ಪ್ರಸ್ತಾವನೆಯಲ್ಲಿ ತಿಳಿಸಿರುವ ಸರ್ವೆ ನಂಬರ್‌ಗಳ ಜಮೀನುಗಳಿಗೆ ನ್ಯಾಯಾಲಯವು ನೀಡಿರುವ ತೀರ್ಪಿನ ಆಧಾರದ ಮೇಲೆ ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28 (ಎ) ರಡಿ ರಚಿಸಿರುವ ಐತೀರ್ಪಿನಂತೆ ಪರಿಹಾರ ಧನ ಮೊತ್ತ ರೂ.54,56,556–00 ಗಳನ್ನು (ಐವತ್ತನಾಲ್ಕು ಲಕ್ಷದ ಐವತ್ತಾರು ಸಾವಿರದ ಐದುನೂರ ಐವತ್ತಾರು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್.ಡಿ. 1 ಟಿಎಫ್‌ಪಿ 2008, ದಿನಾಂಕ 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1209

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗಕ್ಕೆ ಸಂಬಂಧಪಟ್ಟ ಯೋಜನೆಗಳನ್ನು 2010–11 ನೇ ಸಾಲಿನಲ್ಲಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಗಭೂಇ/ಅಜವಿ/ಮು.ಯೋ/2009–10/268, ದಿನಾಂಕ 12–04–2010.

**ಪ್ರಸ್ತಾವನೆ :**

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗಕ್ಕೆ ಸಂಬಂಧಪಟ್ಟ ಯೋಜನೆಗಳನ್ನು 2010–11 ನೇ ಸಾಲಿನಲ್ಲಿ ಮುಂದುವರಿಸಲು ಸರ್ಕಾರದ ಅನುಮೋದನೆಯನ್ನು ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಇವರು ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ : ಸನೀಇ 14 ಅಜಅ 2010, ಬೆಂಗಳೂರು, ದಿನಾಂಕ : 04–05–2010**

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗದಲ್ಲಿನ ಈ ಕೆಳಕಂಡ ಯೋಜನೆಗಳನ್ನು 2010–11ನೇ ಸಾಲಿಗೆ ಮುಂದುವರಿಸಲು ಸರ್ಕಾರವು ಅನುಮೋದನೆ ನೀಡಿದೆ.

| ಕ್ರ.ಸಂ. | ಯೋಜನೆ ಮತ್ತು ಶೀರ್ಷಿಕೆ | 2010–11 ನೇ ಸಾಲಿನ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 1 | ನಿರ್ದೇಶನ ಮತ್ತು ಆಡಳಿತ 2702–02–001–0–01 | 0.00 |
| 2 | ದೂರ ಸಂವೇದನಾ ತಾಂತ್ರಿಕತೆಯಿಂದ ಅಂತರ್ಜಲ ಅಭಿವೃದ್ಧಿ 2707–02–005–0–11 | 12.70 |
| 3 | ಸಮೀಕ್ಷೆ ಮೇಲ್ಮೈ ಜಲ ಮತ್ತು ಅಂತರ್ಜಲದ ಸಂಸ್ಥೆಯ ಬಲವರ್ಧನೆ 2702–02–005–0–15 | 248.81 |
| 4 | ರಾಷ್ಟ್ರೀಯ ಜಲ ಶಾಸ್ತ್ರ ಯೋಜನೆ 2702–02–005–0–80 ಯೋಜನೆ | 168.49 |
| | **ಒಟ್ಟು** | **430.00** |

2) ಮುಂದುವರಿದ ಕಾರ್ಯಕ್ರಮಗಳಿಗೆ ಯಾವುದೇ ಹೊಸ ಘಟಕಗಳ ಪ್ರಸ್ತಾವನೆ ಇದ್ದಲ್ಲಿ ಸರ್ಕಾರದ ಪ್ರತ್ಯೇಕ ಮಂಜೂರಾತಿಯನ್ನು ಪಡೆದು ಅನುಷ್ಠಾನಗೊಳಿಸುವುದು.

3) ಮುಂದುವರಿದ ಯೋಜನೆಗಳಡಿಯಲ್ಲಿ ಖರೀದಿಗಳಿಗೆ ಸಂಬಂಧಿಸಿದಂತೆ ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 2000ರ ಮತ್ತು ಅದರಡಿಯಲ್ಲಿನ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.

4) ಈ ಆದೇಶವನ್ನು ಯೋಜನಾ ಇಲಾಖೆಯ ಆದೇಶ ಸಂಖ್ಯೆ : ಪಿಡಿ 17 ಐಎಂಎಂ 2005 : ದಿನಾಂಕ 10.08.2005 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ. ಸುಧಾಕರ ಶೆಟ್ಟಿ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

ಪಿ.ಆರ್. 1210

## ತೋಟಗಾರಿಕೆ ಸಚಿವಾಲಯ

**ವಿಷಯ :** ತಾಳೆಬೆಳೆ ಅಭಿವೃದ್ಧಿ ಯೋಜನೆಯಡಿ ತಾಳೆಬೆಳೆ ಬೆಲೆ ನಿಗದಿ ಸಮಿತಿಯ ಪುನರ್ ರಚನೆ ಕುರಿತು.

**ಓದಲಾಗಿದೆ :**
1) ಆದೇಶ ಸಂಖ್ಯೆ : ಕೃತೋಇ 306 ತೋಯೋಕಾ 2005, ದಿನಾಂಕ 19–02–2007.
2) ತೋಟಗಾರಿಕಾ ನಿರ್ದೇಶಕರ ಪತ್ರ ಸಂಖ್ಯೆ : ತೋಇ/ತೋಜಂನಿ/ತಾಬೆಯೋ/ಸತೋಅ–1/8/2009–10, ದಿ : 17/20–02–2010.

**ಪ್ರಸ್ತಾವನೆ :**

ಭಾರತ ಸರ್ಕಾರದ ಟೆಕ್ನಾಲಜಿ ಮಿಷನ್ ಆನ್ ಆಯಿಲ್ ಸೀಡ್ಸ್, ಪಲ್ಸಸ್ ಅಂಡ್ ಮೇಜ್ ಯೋಜನೆಯಡಿ ಎಣ್ಣೆ ತಾಳೆ ಅಭಿವೃದ್ಧಿ ಯೋಜನೆಯನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ತಾಳೆಬೆಳೆಯ ಪ್ರದೇಶ ವಿಸ್ತರಣೆ ಮತ್ತು ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲು ವಹಿಸಲಾಗಿರುವ ಖಾಸಗಿ ಸಂಸ್ಥೆಗಳು ತಾಳೆ ಹಣ್ಣುಗಳನ್ನು ರೈತರಿಂದ ನೇರವಾಗಿ ಖರೀದಿಸುತ್ತಿವೆ. ರೈತರ ಹಿತದೃಷ್ಟಿಯಿಂದ ತಾಳೆ ಹಣ್ಣುಗಳ ಖರೀದಿ ಬೆಲೆಯನ್ನು ನಿಗದಿಪಡಿಸಲು ದಿ. 17–07–1993 ರಂದು ತಾಳೆ ಹಣ್ಣುಗಳ ಬೆಲೆ ನಿಗದಿ ಸಮಿತಿಯನ್ನು ರಚಿಸಲಾಗಿದ್ದು ಈ ಸಮಿತಿಯ ಪುನರ್ ರಚನೆಯನ್ನು ಆಗಿಂದಾಗ್ಗೆ ಮಾಡಲಾಗುತ್ತಿದೆ.

ತಾಳೆಬೆಳೆ ಅಭಿವೃದ್ಧಿ ಯೋಜನೆಯಡಿ ತಾಳೆಬೆಳೆ ಬೆಲೆ ನಿಗದಿ ಸಮಿತಿಯನ್ನು ಮೇಲೆ ಓದಲಾದ (1)ರ ಸರ್ಕಾರಿ ಆದೇಶದನ್ವಯ ದಿನಾಂಕ 18–02–2010 ರವರೆಗೆ ಪುನರ್ ರಚಿಸಿದ್ದು, ಅದರ ಅವಧಿ ಮುಗಿದಿರುವುದರಿಂದ ತೋಟಗಾರಿಕೆ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರದನ್ವಯ ಸದರಿ ಸಮಿತಿಯ ಪುನರ್ ರಚನೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಈ ವಿಷಯವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ತೋಇ 37 ತೋಯೋಕಾ 2010, ಬೆಂಗಳೂರು, ದಿನಾಂಕ : 05–05–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ತಾಳೆ ಹಣ್ಣುಗಳ ಖರೀದಿ ಬೆಲೆಯನ್ನು ನಿಗದಿಪಡಿಸಲು ದಿನಾಂಕ 19–02–2007ರ ಸರ್ಕಾರಿ ಆದೇಶದಲ್ಲಿ ಪುನರ್ ರಚಿಸಲಾಗಿದ್ದ ಸಮಿತಿಯನ್ನು ರದ್ದುಗೊಳಿಸಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

1. **ಅಧಿಕಾರಿ ಸದಸ್ಯರುಗಳು :**

| | | |
|---|---|---|
| ಅ) | ಸರ್ಕಾರದ ಕಾರ್ಯದರ್ಶಿಗಳು<br>ತೋಟಗಾರಿಕಾ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು. | ಅಧ್ಯಕ್ಷರು |
| ಆ) | ತೋಟಗಾರಿಕಾ ನಿರ್ದೇಶಕರು,<br>ಲಾಲ್‌ಬಾಗ್, ಬೆಂಗಳೂರು. | ಸದಸ್ಯರು |
| | ನಿರ್ದೇಶಕರು,<br>ರಾಷ್ಟ್ರೀಯ ತಾಳೆ ಸಂಶೋಧನಾ ಕೇಂದ್ರ<br>ಪೆಡವಗಿ, ಆಂಧ್ರ ಪ್ರದೇಶ | ಸದಸ್ಯರು |
| ಈ) | ಸಂಶೋಧನಾ ನಿರ್ದೇಶಕರು,<br>ಕೃಷಿ ವಿಶ್ವವಿದ್ಯಾಲಯ, ಜಿ.ಕೆ.ವಿ.ಕೆ., ಬೆಂಗಳೂರು. | ಸದಸ್ಯರು |
| ಉ) | ತೋಟಗಾರಿಕಾ ಅಪರ ನಿರ್ದೇಶಕರು (ತಾಳೆಬೆಳೆ)<br>ಲಾಲ್‌ಬಾಗ್, ಬೆಂಗಳೂರು. | ಸದಸ್ಯ–ಕಾರ್ಯದರ್ಶಿ |

**2. ರೈತ ಸದಸ್ಯರು :**

| ಕ್ರ. ಸಂ. | ವಲಯ ಹಾಗೂ ಸಂಸ್ಥೆಯ ಹೆಸರು | ರೈತ ಸದಸ್ಯರು |
|---|---|---|
| 1. | ಮೈಸೂರು, ಮಂಡ್ಯ, ಚಾಮರಾಜನಗರ, ಹಾಸನ ಮತ್ತು ಕೊಡಗು<br>ಮೆ : ಪಾಮ್‌ಟೆಕ್ ಇಂಡಿಯಾ ಲಿ., ಮೈಸೂರು | 1) ಶ್ರೀಮತಿ ಸ್ವಾತಿ ಕುಟ್ಟಯ್ಯ, ಬಾಲೆಲೆ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ, (ಮಹಿಳೆ) |
| | | 2) ಶ್ರೀ ಮಹೇಶ್. ವೈ.ಟಿ. ಹೆಚ್.ಡಿ. ಕೋಟೆ ತಾಲ್ಲೂಕು, ಮೈಸೂರು ಜಿಲ್ಲೆ. |
| 2. | ಶಿವಮೊಗ್ಗ, ಚಿಕ್ಕಮಗಳೂರು, ಬಾಗಲಕೋಟೆ, ಬಿಜಾಪುರ ಮತ್ತು ಗುಲ್ಬರ್ಗಾ<br>ಮೆ: ಭದ್ರಾವತಿ ಬಾಲಾಜಿ ಆಯಿಲ್ ಪಾಮ್ಸ್ ಲಿ. | 1) ಶ್ರೀ ಕೆ.ಪಿ. ಪರಮೇಶ್ವರಪ್ಪ, ಕಡೇಕಲ್, ಶಿವಮೊಗ್ಗ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| | | 2) ಶ್ರೀ ರಮೇಶ್ ಮುರಿಗಪ್ಪ ಕೋರಿ, ಬಸವನ ಬಾಗೇವಾಡಿ ತಾಲ್ಲೂಕು, ಬಿಜಾಪುರ ಜಿಲ್ಲೆ. |
| 3. | ದಾವಣಗೆರೆ, ಹಾವೇರಿ ಮತ್ತು ಬಳ್ಳಾರಿ<br>ಮೆ. ಸಿಂಹಪುರಿ ಅಗ್ರಿಟೆಕ್ ಲಿ. | 1) ಶ್ರೀ ಕೆ.ಇ. ನಾಗರಾಜ್, ಹೊನ್ನಾಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. |
| | | 2) ಶ್ರೀ ಜಿ. ರಾಘವೇಂದ್ರ ಶೆಟ್ಟಿ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. |
| 4. | ಕೊಪ್ಪಳ, ರಾಯಚೂರು ಮತ್ತು ಗದಗ<br>ಮೆ : ಫೂಡ್ಸ್ ಫಾಟ್ಸ್ ಅಂಡ್ ಫರ್ಟಿಲೈಜರ್ಸ್ ಲಿ. | 1) ಶ್ರೀ ಸಂಗಣ್ಣಗೌಡ. ಜಿ. ಕರೀಗೌಡ, ಸಾ : ಮುಂಡರಗಿ, ಮುಂಡರಗಿ ತಾಲ್ಲೂಕು, ಗದಗ ಜಿಲ್ಲೆ. |
| | | 2) ಶ್ರೀಮತಿ ಜಯಶ್ರೀ ಮಲ್ಲನಗೌಡ, ಕೊಪ್ಪಳ ತಾಲ್ಲೂಕು, ಕೊಪ್ಪಳ ಜಿಲ್ಲೆ (ಮಹಿಳೆ) |
| 5. | ಬೆಳಗಾವಿ ಮತ್ತು ಉತ್ತರ ಕನ್ನಡ<br>ಮೆ : ಗೋದ್ರೇಜ್ ಅಗ್ರೋವೆಟ್ ಲಿ. | 1) ಶ್ರೀ ಅರವಿಂದ್ ಬಾಲಪ್ಪ ಯನ್ನಗಿ, ಸೌದತ್ತಿ ತಾಲ್ಲೂಕು, ಬೆಳಗಾವಿ ಜಿಲ್ಲೆ. |
| | | 2) ಶ್ರೀ ಸ್ವರೂಪ್ ಧನಂಜಯ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ (ಅಲ್ಪಸಂಖ್ಯಾತರು) |

**3. ಕಂಪನಿ ಪ್ರತಿನಿಧಿಗಳು :**

| | |
|---|---|
| 1. | ವ್ಯವಸ್ಥಾಪಕ ನಿರ್ದೇಶಕರು, ಮೆ: ಭದ್ರಾವತಿ ಬಾಲಾಜಿ ಆಯಿಲ್ ಪಾಮ್ಸ್ ಲಿ., ನಂ.8, ಬಿ.ಹೆಚ್. ರಸ್ತೆ, ಕಾರೇಹಳ್ಳಿ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. |
| 2. | ಡೆಪ್ಯೂಟಿ ಜನರಲ್ ಮ್ಯಾನೇಜರ್, ಮೆ : ಪಾಮ್‌ಟೆಕ್ ಇಂಡಿಯಾ ಲಿ. ನಂ. 501 ಚಿತ್ರಭಾನು ರಸ್ತೆ, ಎ ಮತ್ತು ಬಿ ಬ್ಲಾಕ್, ಕುವೆಂಪು ನಗರ, ಮೈಸೂರು ಜಿಲ್ಲೆ. |
| 3. | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಮೆ. ಸಿಂಹಪುರಿ ಅಗ್ರಿಟೆಕ್ ಲಿ. ನಂ. 134, 1ನೇ ಕ್ರಾಸ್, ದೇವರಾಜ್ ಅರಸ್ ಲೇಔಟ್, ದಾವಣಗೆರೆ ಜಿಲ್ಲೆ. |
| 4. | ಮ್ಯಾನೇಜರ್, ಮೆ : ಫೂಡ್ಸ್ ಫಾಟ್ಸ್ ಅಂಡ್ ಫರ್ಟಿಲೈಜರ್ಸ್ ಲಿ., ಮನೆ ನಂ.9-7-680/528, ಪಂಪಾ ನಿಲಯ, ರಿಲಯನ್ಸ್ ಪೆಟ್ರೋಲ್ ಬಂಕ್ ಹತ್ತಿರ, ಹೊಸಪೇಟೆ ರಸ್ತೆ, ಕೊಪ್ಪಳ ತಾಲ್ಲೂಕು, ಕೊಪ್ಪಳ ಜಿಲ್ಲೆ. |
| 5. | ಮ್ಯಾನೇಜರ್, ಮೆ : ಗೋದ್ರೇಜ್ ಅಗ್ರೋವೆಟ್ ಲಿ. ತಾಳೆಬೆಳೆ ಶಾಖೆ, ಮೊದಲ ಮಹಡಿ, ಎಂ.ಎಸ್. ಕಾಂಪ್ಲೆಕ್ಸ್, ಮೊದಲನೇ ಕ್ರಾಸ್, ಕಾಲಿಅಂಬ್ರಾಯಿ, ಬೆಳಗಾವಿ. |

ಸದರಿ ಸಮಿತಿಯು ಕಾಲಕಾಲಕ್ಕೆ ಸಭೆ ಸೇರಿ ಕೂಲಂಕಷವಾಗಿ ಚರ್ಚಿಸಿ ತಾಳೆ ಹಣ್ಣುಗಳ ಖರೀದಿ ಬೆಲೆ ನಿಗದಿಪಡಿಸಿ ಸೂಕ್ತ ಆದೇಶ ನೀಡುವುದು. ಈ ಸಮಿತಿಯಲ್ಲಿರುವ ರೈತ ಸದಸ್ಯರ ಅವಧಿಯನ್ನು ಈ ಆದೇಶದ ದಿನಾಂಕದಿಂದ ಮೂರು ವರ್ಷಗಳವರೆಗೆ ಎಂದರೆ, ದಿ : 05–05–2010 ರಿಂದ ದಿ : 04–05–2013 ರವರೆಗೆ ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಸ್. ರಾಜು),**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ.

ಪಿ.ಆರ್. 1211

## ವಸತಿ ಸಚಿವಾಲಯ

**ವಿಷಯ :** ಹುಬ್ಬಳ್ಳಿ–ಧಾರವಾಡ ಪಶ್ಚಿಮ ನಗರ ಆಶ್ರಯ ಸಮಿತಿಗೆ ಅಧ್ಯಕ್ಷರ ಮತ್ತು ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ 10–5–2000.
2. ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಪತ್ರ ಸಂ. ಕಗಪ್ರಅಪ್ರಾ/109/2010 ದಿನಾಂಕ 12.3.2010

**ಪ್ರಸ್ತಾವನೆ :**

ಸರ್ಕಾರವು ನಗರ, ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದೆ. ಹುಬ್ಬಳ್ಳಿ–ಧಾರವಾಡ ಪಶ್ಚಿಮ ಮತಕ್ಷೇತ್ರದ ಶಾಸಕರು ಹಾಗೂ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಮಾನ್ಯ ಅಧ್ಯಕ್ಷರಾದ ಶ್ರೀ ಚಂದ್ರಕಾಂತ ಗುರಪ್ಪ ಬೆಲ್ಲದ ಇವರು ಶ್ರೀ ಬಸವರಾಜ ಫಕೀರಪ್ಪ ವಿಭೂತಿ, ಕಲ್ಯಾಣನಗರ, ಧಾರವಾಡ ಇವರನ್ನು ಹುಬ್ಬಳ್ಳಿ–ಧಾರವಾಡ ಪಶ್ಚಿಮ ನಗರ ಆಶ್ರಯ ಸಮಿತಿಯ ಅಧ್ಯಕ್ಷರ ಹುದ್ದೆಗೆ ನೇಮಿಸುವಂತೆ ಸೂಚಿಸಿದ್ದು, ಹುಬ್ಬಳ್ಳಿ–ಧಾರವಾಡ ಪಶ್ಚಿಮ ನಗರ ಆಶ್ರಯ ಸಮಿತಿಗೆ ಅಧ್ಯಕ್ಷರನ್ನು ಮತ್ತು ಅಧಿಕಾರೇತರ ಸದಸ್ಯರನ್ನು ನೇಮಿಸುತ್ತ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 18 ಹೆಚ್‌ಎಎಸ್ 2010, ಬೆಂಗಳೂರು, ದಿನಾಂಕ: 4ನೇ ಮೇ 2010**

ಶ್ರೀ ಬಸವರಾಜ ಫಕೀರಪ್ಪ ವಿಭೂತಿ 'ಶಶಿ', 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಕಲ್ಯಾಣನಗರ, ಧಾರವಾಡ ಇವರನ್ನು ಹುಬ್ಬಳ್ಳಿ–ಧಾರವಾಡ ಪಶ್ಚಿಮ ನಗರ ಆಶ್ರಯ ಸಮಿತಿಯ ಅಧ್ಯಕ್ಷರ ಹುದ್ದೆಗೆ ಮತ್ತು ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ:

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| **1** | ಶ್ರೀಮತಿ ಗೀತಾ ಗೌಡಪ್ಪ ಪಾಟೀಲ್, 2ನೇ ಅಡ್ಡರಸ್ತೆ, ಹನಮಂತದೇವರ ಗುಡಿ ಹತ್ತಿರ, ಲಕ್ಷ್ಮೀಸಿಂಗನಕೆರೆ, ಸಾರಸ್ವತಪುರ, ಧಾರವಾಡ. | ಪ.ಜಾತಿ/ಪ.ವರ್ಗ (ಮಹಿಳೆ) |
| 2 | ಶ್ರೀ ಮಹದೇವಪ್ಪ ಕಲ್ಲಪ್ಪ ಹೊಸಮನಿ, ಗೋಕುಲ ಬಸ್ ನಿಲ್ದಾಣದ ಹತ್ತಿರ, ಹುಬ್ಬಳ್ಳಿ | ಹಿಂದುಳಿದ ವರ್ಗ |
| 3 | ಶ್ರೀ ಲಲಿತ್ ಮೋಹನ್ ಬಂಡಾರಿ, 'ಮೋಹನ ಸ್ಮೃತಿ', ಲಕ್ಷ್ಮೀನಾರಾಯಣ ಗುಡಿ ರಸ್ತೆ, ರವಿವಾರಪೇಟೆ, ಧಾರವಾಡ. | ಅಲ್ಪಸಂಖ್ಯಾತರು |
| 4 | ಶ್ರೀ ಎಂ. ಬಸವಣ್ಣ, ಮನೆ ನಂ. 361, ಆಶ್ರಯ ಕಾಲನಿ, ಸತ್ತೂರ, ತಾ. ಧಾರಾವಾಡ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ.ಆರ್. ವಲ್ಲೂರ)**
ಪೀಠಾಧಿಕಾರಿ–2, ವಸತಿ ಇಲಾಖೆ.

ಪಿ.ಆರ್. 1212

**ವಸತಿ ಸಚಿವಾಲಯ**

**ವಿಷಯ :** ನೆರೆಹಾವಳಿ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವ ಬಗ್ಗೆ.

**ಓದಲಾಗಿದೆ :** 10 ಸರ್ಕಾರದ ಆದೇಶ ಸಂ. ವಇ 16 ಹೆಚ್‌ಎಹೆಚ್ 2010 ದಿನಾಂಕ 12.3.2010

2) ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ. ಮುಮಕಾ / 2040 / 2010 ದಿನಾಂಕ 8.4.2010.

3) ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ. ಮುಮಕಾ / 2313 / 2010 ದಿನಾಂಕ 22.4.2010.

4) ಮುಖ್ಯ ಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂ. ಮುಮಕಾ / 2318 / 2010 ದಿನಾಂಕ 22.4.2010.

**ಪ್ರಸ್ತಾವನೆ :**

ಕಳೆದ ವರ್ಷ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡ ಎಲ್ಲ ಬಡ ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದ ಮುಖಾಂತರ ನಿರ್ಮಿಸಲು ಆದೇಶಿಸಲಾಗಿದ್ದ 7,376 ಮನೆಗಳ ಪೈಕಿ ಮೇಲೆ (2)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಅಮರಗೋಳ ಗ್ರಾಮದಲ್ಲಿ ನಿರ್ಮಿಸಬೇಕಾದ ಮನೆಗಳ ಸಂಖ್ಯೆ 350 ಇದ್ದದ್ದನ್ನು 415 ಎಂದು ತಿದ್ದಿ ಓದಿಕೊಳ್ಳುವಂತೆ ಸೂಚಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮೆ. ಹೋಪ್ ಫೌಂಡೇಶನ್ ಸಂಸ್ಥೆಯವರು ನಿರ್ಮಿಸಲು ಒಪ್ಪಿಕೊಂಡ ರಾಯಚೂರು ತಾಲ್ಲೂಕಿನ ಜಾಗೀರ್ ವೆಂಕಟಾಪುರ ಗ್ರಾಮದ 150 ಮನೆಗಳ ಪೈಕಿ 90 ಮನೆಗಳನ್ನು ನಿರ್ಮಾಣ ಮಾಡುವುದಾಗಿ ತಿಳಿಸಿರುವುದರಿಂದ, ಉಳಿದ 60 ಮನೆಗಳನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದಿಂದ ನಿರ್ಮಿಸಲು ಮರುಹಂಚಿಕೆ ಮಾಡಲಾಗಿದೆ. ಮೇಲೆ (4)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಮೆ. ಜಿಂದಾಲ್ ಸ್ಟೀಲ್ ವರ್ಕ್ಸ್ ಸಂಸ್ಥೆಯವರು ನಿರ್ಮಿಸಲು ಒಪ್ಪಿಕೊಂಡ ರೋಣ ತಾಲ್ಲೂಕಿನ ವೈ ಎಸ್. ಹಡಗಲಿ ಗ್ರಾಮದ 599 ಮನೆಗಳು ಮತ್ತು ಮಾಳವಾಡ ಗ್ರಾಮದ 600 ಮನೆಗಳ ಪೈಕಿ, ವೈ.ಎಸ್. ಹಡಗಲಿ ಗ್ರಾಮದಲ್ಲಿ 140 ಮನೆಗಳನ್ನು ಮತ್ತು ಮಾಳವಾಡ ಗ್ರಾಮದಲ್ಲಿ 135 ಮನೆಗಳನ್ನು ನಿರ್ಮಿಸಲು ಇಚ್ಛಿಸಿದ್ದು, ಉಳಿದ ಮನೆಗಳ ನಿರ್ಮಾಣಕ್ಕೆ ತಗಲುವ ವೆಚ್ಚವನ್ನು ಭರಿಸಲು ಸಿದ್ಧರಿರುವುದಾಗಿ ತಿಳಿಸಿರುವುದರಿಂದ, ಉಳಿದ ಒಟ್ಟು 924 ಮನೆಗಳನ್ನು ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮದಿಂದ ನಿರ್ಮಿಸಲು ಮರುಹಂಚಿಕೆ ಮಾಡಲಾಗಿದೆ. ಈ ಹೆಚ್ಚುವರಿ ಮನೆಗಳನ್ನು ಮರುಹಂಚಿಕೆ ಮಾಡುತ್ತ ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂ. ವಇ 16 ಹೆಚ್‌ಎಹೆಚ್ 2010 (ಭಾ), ಬೆಂಗಳೂರು, ದಿನಾಂಕ 4ನೇ ಮೇ 2010**

ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಸುರಿದ ಭಾರಿ ಮಳೆ ಮತ್ತು ನೆರೆಹಾವಳಿಯ ಸಂತ್ರಸ್ಥರಿಗೆ ಪುನರ್ವಸತಿ ಕಲ್ಪಿಸುವುದಕ್ಕಾಗಿ ರಾಜೀವ ಗಾಂಧಿ ಗ್ರಾಮೀಣ ವಸತಿ ನಿಗಮವು ಈಗ ನಿರ್ಮಿಸುತ್ತಿರುವ ಮನೆಗಳ ನಿರ್ಮಾಣದ ಷರತ್ತು ಮತ್ತು ನಿಬಂಧನೆಗಳ ಮೇರೆಗೆ ಈ ಕೆಳಗಿನಂತೆ ಹೆಚ್ಚುವರಿ ಮನೆಗಳ ನಿರ್ಮಾಣವನ್ನು ಕೈಗೊಳ್ಳಲು ಆದೇಶಿಸಲಾಗಿದೆ.

ಅ. ಗದಗ ಜಿಲ್ಲೆಯ ರೋಣ ತಾಲ್ಲೂಕಿನ ಅಮರಗೋಳ ಗ್ರಾಮದಲ್ಲಿ ನಿರ್ಮಿಸಬೇಕಾದ ಮನೆಗಳ ಸಂಖ್ಯೆ 350 ಇದ್ದದ್ದನ್ನು 415 ಎಂದು ಬದಲಾಯಿಸಿ, 65 ಹೆಚ್ಚುವರಿ ಮನೆಗಳ ನಿರ್ಮಾಣ.

ಆ. ಮೆ. ಹೋಪ್ ಫೌಂಡೇಶನ್ ಸಂಸ್ಥೆಯವರು ನಿರ್ಮಿಸಲು ಒಪ್ಪಿಕೊಂಡ ರಾಯಚೂರು ತಾಲ್ಲೂಕಿನ ಜಾಗೀರ್ ವೆಂಕಟಾಪುರ ಗ್ರಾಮದ 150 ಮನೆಗಳ ಪೈಕಿ 90 ಮನೆಗಳನ್ನು ನಿರ್ಮಾಣ ಮಾಡುವುದಾಗಿ ತಿಳಿಸಿರುವುದರಿಂದ, ಉಳಿದ 60 ಹೆಚ್ಚುವರಿ ಮನೆಗಳ ನಿರ್ಮಾಣ/

ಇ. ಮೆ. ಜಿಂದಾಲ್ ಸ್ಟೀಲ್ ವರ್ಕ್ಸ್ ಸಂಸ್ಥೆಯವರು ನಿರ್ಮಿಸಲು ಒಪ್ಪಿಕೊಂಡ ರೋಣ ತಾಲ್ಲೂಕಿನ ವೈ.ಎಸ್.ಹಡಗಲಿ ಗ್ರಾಮದ 599 ಮನೆಗಳು ಮತ್ತು ಮಾಳವಾಡ ಗ್ರಾಮದ 600 ಮನೆಗಳ ಪೈಕಿ, ವೈ.ಎಸ್.ಹಡಗಲಿ ಗ್ರಾಮದಲ್ಲಿ 140 ಮನೆಗಳನ್ನು ಮತ್ತು ಮಾಳವಾಡ ಗ್ರಾಮದಲ್ಲಿ 135 ಮನೆಗಳನ್ನು ನಿರ್ಮಿಸಲು ಇಚ್ಛಿಸಿದ್ದು, ಉಳಿದ ಮನೆಗಳ ನಿರ್ಮಾಣಕ್ಕೆ ತಗಲುವ ವೆಚ್ಚವನ್ನು ಭರಿಸಲು ಸಿದ್ಧರಿರುವುದಾಗಿ ತಿಳಿಸಿರುವುದರಿಂದ, ವೈ.ಎಸ್.ಹಡಗಲಿ ಗ್ರಾಮದಲ್ಲಿ 459 ಮನೆಗಳು ಮತ್ತು ಮಾಳವಾಡ ಗ್ರಾಮದಲ್ಲಿ 465 ಮನೆಗಳು ಹೀಗೆ ಉಳಿದ ಒಟ್ಟು 924 ಹೆಚ್ಚುವರಿ ಮನೆಗಳ ನಿರ್ಮಾಣ.

2. ಮೆ. ಜಿಂದಾಲ್ ಸ್ಟೀಲ್ ವರ್ಕ್ಸ್ ಸಂಸ್ಥೆಯವರು ಉಳಿದ ಮನೆಗಳ ನಿರ್ಮಾಣಕ್ಕೆ ತಗಲುವ ವೆಚ್ಚವನ್ನು ಭರಿಸಲು ಸಿದ್ಧರಿರುವುದಾಗಿ ತಿಳಿಸಿರುವುದರಿಂದ, ಈ ಮನೆಗಳ ನಿರ್ಮಾಣದ ವೆಚ್ಚವನ್ನು ಆ ಸಂಸ್ಥೆಯಿಂದ ಮರುಪಾವತಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1213

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2010–11 ರ ಹಣಕಾಸು ವರ್ಷದಲ್ಲಿ ಮೊದಲನೇ ಕಂತಿನ ಸಹಾಯಾನುದಾನ ಬಿಡುಗಡೆ ಕುರಿತು.

**ಪ್ರಸ್ತಾವನೆ :**

1. 2010–11 ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7 ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ರೂಪದಲ್ಲಿ ರೂ. 213.00 ಲಕ್ಷಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.

2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2010–11ನೇ ಸಾಲಿಗೆ ಮೊದಲನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 51,66,095/– ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್ಆರ್ 2010 ಬೆಂಗಳೂರು, ದಿನಾಂಕ 24ನೇ ಏಪ್ರಿಲ್ 2010**

ಸರ್ಕಾರವು 2010–11 ನೇ ಹಣಕಾಸು ವರ್ಷದ ಮೊದಲನೇ ತ್ರೈಮಾಸಿಕ ಅವಧಿಗೆ "2801–80–101–1–07–101 (Grant-in-aid) (Non Plan) ರಲ್ಲಿ ಸಹಾಯಾನುದಾನ" ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 51,66,095/– (ಐವತ್ತೊಂದು ಲಕ್ಷದ ಅರವತ್ತಾರು ಸಾವಿರದ ತೊಂಬತ್ತೈದು ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆಯ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 21 ಟಿಎಫ್‌ಪಿ 2006 ದಿನಾಂಕ 02–09–2006, ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ 16–05–2008 ಮತ್ತು ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ 20–04–2010 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1214

**ಎಸ್. ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** 2010–11ನೇ ಸಾಲಿನಲ್ಲಿ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ–2010ರ ಕಾರ್ಯಕ್ರಮಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ. ವಾಕೈ/52/ಅಂಆಸ(1)/2010, ಬೆಂಗಳೂರು ದಿನಾಂಕ 01.4.2010
2) ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ರವರ ಪತ್ರ ದಿನಾಂಕ 27–4–2010.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2010 ರ ಕಾರ್ಯಕ್ರಮ ನಡೆಸಲು ಕರ್ನಾಟಕ ಉದ್ಯೋಗ ಮಿತ್ರ ಬೆಂಗಳೂರು ಇವರಿಗೆ ಲೆಕ್ಕ ಶೀರ್ಷಿಕೆ 2852–80–800–0–46 ರ ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯಡಿ ಒಟ್ಟು ರೂ. 1000.00 ಲಕ್ಷಗಳ ಆಯವ್ಯಯವನ್ನು ಹಂಚಿಕೆ ಮಾಡಲಾಗಿದೆ.

ಏಪ್ರಿಲ್ 2010ರ ಮಾಹೆಯ ಮಾಸಿಕ ಕಾರ್ಯಕ್ರಮ ಅನುಷ್ಠಾನದ ಸಭೆಯ ತೀರ್ಮಾನದಂತೆ ರೂ. 300.00 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಉಲ್ಲೇಖ (2) ರನ್ವಯ ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 104 ಎಸ್‌ಪಿಐ 2010, ಬೆಂಗಳೂರು, ದಿನಾಂಕ 4ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2010 ರ ಕಾರ್ಯಕ್ರಮಕ್ಕೆ ರೂ. 300.00 ಲಕ್ಷಗಳ ಅನುದಾನವನ್ನು 2010–2011 ರ ಆಯವ್ಯಯ ಲೆಕ್ಕ ಶೀರ್ಷಿಕೆ 2852–80–800–0–46 ರ ಅಡಿಯಲ್ಲಿ ಈಗ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ರವರು ಸ್ವೀಕೃತಿಯ ರಶೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಮೇಲು

ರುಜುವನ್ನು ಪಡೆದು ಸದರಿ ಅನುದಾನವನ್ನು ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರಿಂದ ನಗದೀಕರಿಸಲು ಆದೇಶಿಸಲಾಗಿದೆ.

ಸದರಿ ಮೊತ್ತವನ್ನು 2010–11ನೇ ಸಾಲಿನ ಆಯವ್ಯಯದ ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯ ಲೆಕ್ಕಶೀರ್ಷಿಕೆ 2852–80–800–0–46 ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1215

**ಅಪರ್ಣ ಪಾವಟೆ**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಎ ಮತ್ತು ಬಿ ವೃಂದದ ಹುದ್ದೆಗಳಿಗೆ ಪದೋನ್ನತಿ ನೀಡಲು ಅಧಿಕಾರಿಗಳ ಸೂಕ್ತತೆಯನ್ನು ಪರಿಗಣಿಸುವುದಕ್ಕಾಗಿ ಇಲಾಖಾ ಪದೋನ್ನತಿ ಸಮಿತಿಗಳನ್ನು ರಚಿಸುವ ಬಗ್ಗೆ–ಆದೇಶ.

**ಓದಲಾಗಿದೆ :** 1) ದಿನಾಂಕ 9.10.1985ರ ಅಧಿಕೃತ ಜ್ಞಾಪನ ಸಂ. ಡಿಪಿಎಆರ್ 5 ಎಸ್‌ಆರ್‌ಸಿ 84.
2) ದಿನಾಂಕ 6.11.07ರ ಸರ್ಕಾರಿ ಆದೇಶ ಸಂ. ಲೋಇ 38 ಬನೌಸೇ 2007.

**ಸರ್ಕಾರದ ಆದೇಶ ಸಂಖ್ಯೆ: ಲೋಇ 14 ಬನೌಸೇ 2010, ಬೆಂಗಳೂರು, ದಿನಾಂಕ 29ನೇ ಏಪ್ರಿಲ್ 2010**

**ಪ್ರಸ್ತಾವನೆ :**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಎ ಮತ್ತು ಬಿ ವೃಂದದ ಹುದ್ದೆಗಳಿಗೆ ಪದೋನ್ನತಿ ನೀಡಲು ಅಧಿಕಾರಿಗಳ ಸೂಕ್ತತೆಯನ್ನು ಪರಿಗಣಿಸುವುದಕ್ಕಾಗಿ, ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 9.10.85ರ ಅಧಿಕೃತ ಜ್ಞಾಪನದನ್ವಯ, ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ 6.11.07ರ ಸರ್ಕಾರಿ ಆದೇಶದಲ್ಲಿ ಇಲಾಖಾ ಪದೋನ್ನತಿ ಸಮಿತಿಗಳನ್ನು ರಚಿಸಲಾಗಿತ್ತು. ಸದರಿ ಆದೇಶವು ಅಸ್ಪಷ್ಟವಾಗಿದ್ದ ಪ್ರಯುಕ್ತ ಅದನ್ನು ರದ್ದುಪಡಿಸಿ, ಕೆಳಕಂಡಂತೆ ಇಲಾಖಾ ಪದೋನ್ನತಿ ಸಮಿತಿಗಳನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

**ಆದೇಶ**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಅರ್ಹ ಅಧಿಕಾರಿ/ನೌಕರರುಗಳಿಗೆ ಪದೋನ್ನತಿ ನೀಡಲು ಅಧಿಕಾರಿ/ನೌಕರರ ಸೂಕ್ತತೆಯನ್ನು ಪರಿಗಣಿಸುವುದಕ್ಕಾಗಿ ಕೆಳಕಂಡಂತೆ ಇಲಾಖಾ ಪದೋನ್ನತಿ ಸಮಿತಿಗಳನ್ನು ರಚಿಸಲಾಗಿದೆ.

**(1)ಕೆ.ಎ.ಎಸ್. ಎ–ವೃಂದದ ಹಿರಿಯ ವೇತನ ಶ್ರೇಣಿ ಮತ್ತು ಮೇಲ್ಪಟ್ಟ ಹುದ್ದೆಗಳ ತತ್ಸಮಾನ ವೇತನ ಶ್ರೇಣಿ ಹೊಂದಿರುವ ಎ–ವೃಂದದ ಹುದ್ದೆಗಳಿಗೆ ಪದೋನ್ನತಿ ನೀಡಲು:**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | ಅಧ್ಯಕ್ಷರು |
| 2 | ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ನಿರ್ದೇಶನಾಲಯ, | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಅವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಉಪ ಕಾರ್ಯದರ್ಶಿ ಹುದ್ದೆಗೆ ಕಡಿಮೆ ಇಲ್ಲದ ಅಧಿಕಾರಿ | ಸದಸ್ಯರು |

**(2) ಬಿ ಮತ್ತು ಸಿ ವೃಂದದ ಅಧಿಕಾರಿಗಳಿಗೆ ಎ– ವೃಂದದ ಹುದ್ದೆಗಳಿಗೆ** (ಕೆ.ಎ.ಎಸ್. ಎ–ವೃಂದದ ಹಿರಿಯ ವೇತನ ಶ್ರೇಣಿ ಮತ್ತು ಮೇಲ್ಪಟ್ಟ ಹುದ್ದೆಗಳ ತತ್ಸಮಾನ ವೇತನ ಶ್ರೇಣಿ ಹೊಂದಿರುವ ಹುದ್ದೆಗಳನ್ನು ಹೊರತುಪಡಿಸಿ) ಮತ್ತು ಸಿ ವೃಂದದ ನೌಕರರಿಗೆ ಬಿ ವೃಂದದ ಹುದ್ದೆಗಳಿಗೆ ಪದೋನ್ನತಿ ನೀಡಲು :

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | ಅಧ್ಯಕ್ಷರು |
| 2 | ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ನಿರ್ದೇಶನಾಲಯ | ಸದಸ್ಯರು |
| 3 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ / ಉಪ ಕಾರ್ಯದರ್ಶಿ (ಸೇವೆಗಳು), ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1216

**ಜಿ. ಸಿದ್ದಗಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರುಗಳು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಸಿ)

**ಒಳಾಡಳಿತ ಸಚಿವಾಲಯ**

**ವಿಷಯ:** ಕರಾವಳಿ ಕಾವಲು ಘಟಕ, ಉಡುಪಿ ಇವರಿಗೆ ಕರ್ನಾಟಕ ರಾಜ್ಯಪತ್ರವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ರವರ ಪತ್ರ ಸಂಖ್ಯೆ: ದಾವಿ/4/2007-08, ದಿನಾಂಕ : 07-01-2009

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರು ಕಂಪೈಲರ್, ಕರ್ನಾಟಕ ರಾಜ್ಯಪತ್ರ, ಬೆಂಗಳೂರು ಇವರು ಕರಾವಳಿ ಕಾವಲು ಘಟಕ, ಉಡುಪಿ ಕಛೇರಿ ಸ್ಥಾಪಿಸಲು ಮಂಜೂರಾತಿ ನೀಡಿರುವ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯಪತ್ರ ಸರಬರಾಜು ಮಾಡಲು ಆದೇಶವಿಲ್ಲದೆ ಇರುವುದರಿಂದ ಕರ್ನಾಟಕ ರಾಜ್ಯಪತ್ರ ಸರಬರಾಜು ಮಾಡಲು ಸರ್ಕಾರದಿಂದ ಮಂಜೂರಾತಿ ಪಡೆಯುವಂತೆ ತಿಳಿಸಿರುವ ಪ್ರಯುಕ್ತ ಈ ಕುರಿತು ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಹೆಚ್‌ಡಿ 289 ಪಿಓಪಿ 2009, ಬೆಂಗಳೂರು, ದಿನಾಂಕ 10-05-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಡುಪಿಯಲ್ಲಿರುವ ಕರಾವಳಿ ಕಾವಲು ಘಟಕಕ್ಕೆ ಕರ್ನಾಟಕ ರಾಜ್ಯ ಪತ್ರವನ್ನು ಸರಬರಾಜು ಮಾಡಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಆದೇಶವನ್ನು ಶಿಕ್ಷಣ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 2386 2009, ದಿನಾಂಕ: 26/04/2010 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಬಿ. ಎಂ. ಲಕ್ಷ್ಮೀನಾರಾಯಣ
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

ಪಿ.ಆರ್. 1231

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕಿನ ಘಟಪ್ರಭಾ ನೀರಾವರಿ ಮತ್ತು ವ್ಯವಸಾಯ ಅಭಿವೃದ್ಧಿ ಸಂಘ (ಜೀರಗಾಳ) ಇವರಿಂದ ನಿರ್ಮಿಸಲ್ಪಟ್ಟ ಬ್ಯಾರೇಜಿನ ನಿರ್ವಹಣೆ ಕಾರ್ಯವನ್ನು ಸರ್ಕಾರಕ್ಕೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 25-03-2010 ರಂದು ಕೊನೆಗೊಂಡ ಪತ್ರ ಸಂಖ್ಯೆ: ಮುಇಂ/ಸನೀ (ಉ)ವ/ ಬಿಜಾ/ ಸ. ಇಂ-6/2009-10/2039.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಘಟಪ್ರಭಾ ನೀರಾವರಿ ಮತ್ತು ವ್ಯವಸಾಯ ಅಭಿವೃದ್ಧಿ ಸಂಘ (ಜೀರಗಾಳ) ಇವರು ಜೀರಗಾಳ ಬಳಿ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ಯಾರೇಜನ್ನು ನಿರ್ಮಿಸಿದ್ದು, ಸದರಿ ಬ್ಯಾರೇಜಿನ ನಿರ್ವಹಣೆಯನ್ನು ಆ ಸಂಸ್ಥೆಯೇ ನಿರ್ವಹಿಸುತ್ತಾ ಬಂದಿದ್ದು, ಪ್ರಸ್ತುತ ನಿರ್ವಹಣಾ ಕಾರ್ಯವನ್ನು ಸಂಸ್ಥೆಯಿಂದ ನಿರ್ವಹಿಸಲು ಸಾಧ್ಯವಾಗುತ್ತಿಲ್ಲವೆಂದು ಇದಕ್ಕೆ ಕಾರಣ ರೈತರು ತಮ್ಮ ತಮ್ಮ ಚಟುವಟಿಕೆಗಳಲ್ಲಿ ತೊಡಗಿ ಸಂಸ್ಥೆಯ ಕಾರ್ಯ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವಿಕೆ ಕಡಿಮೆಯಾಗಿರುವುದರಿಂದ ಬ್ಯಾರೇಜಿನ ನಿರ್ವಹಣಾ ಕಾರ್ಯವನ್ನು ನಿಭಾಯಿಸಲು ಆಗುತ್ತಿಲ್ಲವೆಂದು ಬ್ಯಾರೇಜಿನ ನಿರ್ವಹಣೆಯನ್ನು ಸರ್ಕಾರಕ್ಕೆ ವಹಿಸಲು ಸರ್ವ ಸದಸ್ಯರ ಸಭೆಯಲ್ಲಿ ತೀರ್ಮಾನಿಸಿರುವುದಾಗಿ ತಿಳಿಸಿ, ನಿರ್ವಹಣೆಯನ್ನು ಸರ್ಕಾರಕ್ಕೆ ವಹಿಸಿಕೊಳ್ಳಲು ಸಂಸ್ಥೆಯ ಅಧ್ಯಕ್ಷರು ಮನವಿ ಸಲ್ಲಿಸಿದ್ದಾರೆ.

ಈ ಬ್ಯಾರೇಜನ್ನು ನಿರ್ವಹಣೆಗಾಗಿ ಸಣ್ಣ ನೀರಾವರಿ ಇಲಾಖೆಗೆ ಹಸ್ತಾಂತರಿಸಿಕೊಳ್ಳಬಹುದೆಂದು ಮೇಲೆ ಓದಲಾದ ದಿನಾಂಕ: 25-03-2010ರ ಪತ್ರದಲ್ಲಿ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರು ಅಭಿಪ್ರಾಯ ನೀಡಿರುತ್ತಾರೆ. ಈ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸನೀಇ 12 ಆಪಿಬಿಂ 2009, ಬೆಂಗಳೂರು, ದಿನಾಂಕ 11ನೇ ಮೇ 2010**

ಬಾಗಲಕೋಟೆ ಜಿಲ್ಲೆ ಮುಧೋಳ ತಾಲ್ಲೂಕು, ಘಟಪ್ರಭಾ ನೀರಾವರಿ ಮತ್ತು ವ್ಯವಸಾಯ ಅಭಿವೃದ್ಧಿ ಸಂಘ (ಜೀರಗಾಳ) ಇವರು ಮುಧೋಳ ತಾಲ್ಲೂಕಿನ ಜೀರಗಾಳ ಬಳಿ ಘಟಪ್ರಭಾ ನದಿಗೆ ಅಡ್ಡಲಾಗಿ ನಿರ್ಮಿಸಿರುವ ಬ್ಯಾರೇಜನ್ನು ನಿರ್ವಹಣೆಗಾಗಿ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಗೆ ವರ್ಗಾಯಿಸಿಕೊಳ್ಳಲು ಸರ್ಕಾರವು ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1232 ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಸ್.ಪಿ. ಅಣ್ಣೇಗೌಡ, ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ) ಇವರ ಸ್ಥಾನಪನ್ನ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ** : 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 369 ಪಿಪಿಇ 2007, ದಿನಾಂಕ : 22–07–2008.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿ.ಶಾ. 1/111/2009–10, ದಿನಾಂಕ 18–07–2009

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 22–07–2008ರ ಅಧಿಸೂಚನೆಯಲ್ಲಿ ಶ್ರೀ ಎಸ್.ಪಿ. ಅಣ್ಣೇಗೌಡ, ಅಭಿಯೋಗ ಉಪನಿರ್ದೇಶಕರು ಇವರಿಗೆ ಜಂಟಿ ಅಭಿಯೋಗ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಅವಧಿ ಮೇಲೆ ಮುಂಬಡ್ತಿ ನೀಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ದಿನಾಂಕ: 18–07–2009ರ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಶ್ರೀ ಎಸ್.ಪಿ. ಅಣ್ಣೇಗೌಡ, ಜಂಟಿ ಅಭಿಯೋಗ ನಿರ್ದೇಶಕರ ಸ್ಥಾನಪನ್ನ ಅವಧಿಯನ್ನು ಘೋಷಿಸಬೇಕಾಗಿದ್ದು ಸ್ಥಾನಪನ್ನ ಅವಧಿಯಲ್ಲಿ ಅವರಿಗೆ ಸಂಬಂಧಪಟ್ಟಂತೆ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇಲ್ಲದೇ ಇದ್ದು, ಇವರ ಸೇವೆಯು ಸದರಿ ಅವಧಿಯಲ್ಲಿ ತೃಪ್ತಿಕರವಾಗಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19(3)(ಸಿ) ಪ್ರಕಾರ ಸದರಿ ಅಧಿಕಾರಿಯ ಸ್ಥಾನಪನ್ನ ಅವಧಿ ತೃಪ್ತಿಕರವೆಂದು ಘೋಷಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಒಇ 358 ಪಿಪಿಇ 2009, ಬೆಂಗಳೂರು, ದಿನಾಂಕ 12ನೇ ಮೇ2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 19(3)(ಸಿ) ರ ಪ್ರಕಾರ ಶ್ರೀ ಎಸ್.ಪಿ ಅಣ್ಣೇಗೌಡ, ಜಂಟಿ ಅಭಿಯೋಗ ನಿರ್ದೇಶಕರವರ ಸ್ಥಾನಪನ್ನ ಅವಧಿಯನ್ನು ದಿನಾಂಕ: 30–06–2009 ರಿಂದ ತೃಪ್ತಿಕರವಾಗಿ ಪೂರೈಸಿದ್ದಾರೆ ಎಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಕೆ.ಸಿ. ಸಿದ್ದಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 1233 ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**COMMERCE AND INDUSTRIES SECRETARIAT**

**CORRIGENDUM**

N0. CI/72/SPI/2010, Bangalore, dated 10-05-2010

**Sub :-** Approval for land acquisition through KIADB in favour of M/s Anjani Portland Cement Ltd., to establish a " Portland Cement Plant".

**Ref :-** 1) Govt. Order No. CI 72 SPI 2010 dated 25-02-2010.

2) Proceedings of the 21st State High Level Clearance Committee (SHLCC) Meeting held on 29-03-2010.

In the Govt. Order No. CI 72 SPI 2010 dated 25-02-2010 the name of the company should be read as M/s Anjani Cement (Karnataka) Ltd.," in place of M/s Anjani Portland Cement Ltd., and in the same Govt. order, "acquisition and allotment of required balance land" should be read as "acquisition and allotment of required balance land of 634 acres".

By Order and in the name of the Governor of Karnataka

**(Aparna Pavate)**
Desk Officer (Technical Cell)
Commerce & Industries Department

P.R. 1234

**COMMERCE AND INDUSTRIES SECRETARIAT**

**Sub :-** The Project Proposal of M/s Lafarge India Pvt. Ltd., to setup "3 Million MTPA Cement Plant and 43 MW Coal Based Thermal Power Plant", at Ravoor, Gandhinagar, and Vadi Villages of Chittapur Taluk, Gulbarga District.

**Read :-**1) Govt. Order No. CI 29 SPI 2010 dated : 15.02.2010.

2) Company's Letter dated : 23-04-2010.

**Preamble:**

The proposal of M/s Lafarge India Pvt. Ltd., to establish " 3 Million MTPA Cement Plant and 43 MW Coal Based Thermal Power Plant", at Ravoor, Gandhinagar, and Vadi Villages of Chittapur Taluk, Gulbarga District" was approved in the 20th SHLCC meeting held on 05-01-2010 and accordingly the Govt. Order read at (1) above was issued.

The company vide letter at (2) above, have requested to amend the clause pertaining to land under Infrastructure facilities, as the company is already in possession of mining lease through ML No. 2588 for 1968 acres.

Hence the following Order.

**Government Order No. CI 29 SPI 2010, Bangalore, dated : 7th May 2010**

The Clause 1 of the Govt. Order read at (1) above namely-

"1. Land 601 acres 5 guntas for plant area and the required land for mining area – U/s 109 of KLR Act and conversion of the same to industrial use.

The land requirement for limestone mining area will be decided by the Government depending on ore quality."

Shall be read as

" 1. Land: Permission to purchase 601 acres 5 guntas of land for plant and 1968 acres of land for mining purpose ( as per mining lease No. 2588) U/s 109 of KLR Act and to convert the plant area for Industrial use."

By Order and in the name of the Governor of Karnataka

**(Aparna Pavate)**
Desk Officer (Technical Cell)
Commerce and Industries Department

P.R. 1235

## ಇಂಧನ ಸಚಿವಾಲಯ

**ವಿಷಯ** : M/s Western Ghats Hydro Ventures Private Limited ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/06/ಗೌರಿಹಳ್ಳಿ ಎಂಹೆಚ್‌ಎಸ್/09/1236 ದಿನಾಂಕ 11/12–03–2009 ಸಂಖ್ಯೆ : ಕೆಆರ್‌ಇಡಿ/06/ಗೌರಿಹಳ್ಳಿ/2009/3077 ದಿನಾಂಕ: 14/19–9–2009 ಮತ್ತು ಸಂಖ್ಯೆ : ಕೆಆರ್‌ಇಡಿ/06/ಗೌರಿಹಳ್ಳಿ ಕಿ.ಜ.ವಿ./2010/671, ದಿನಾಂಕ : 01/6–03–2010.

2. ದಿನಾಂಕ : 26–03–2010 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Western Ghats Hydro Ventures Private Limited ಇವರಿಗೆ ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲ್ಲೂಕಿನ ಕಾಮೇನಹಳ್ಳಿ ಮತ್ತು ಅಮ್ಮನಾಳ್ ಗ್ರಾಮಗಳ ಗೌರಿಹಳ್ಳಿ ತೊರೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 26–03–2010ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Western Ghats Hydro Ventures Private Limited ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 267 ಎನ್‌ಸಿಇ 2009, ಬೆಂಗಳೂರು, ದಿನಾಂಕ: 10–05– 2010**

M/s Western Ghats Hydro Ventures Private Limited ಇವರಿಗೆ ಚಿಕ್ಕಮಗಳೂರು ಜಿಲ್ಲೆಯ, ಚಿಕ್ಕಮಗಳೂರು ತಾಲ್ಲೂಕಿನ ಕಾಮೇನಹಳ್ಳಿ ಮತ್ತು ಅಮ್ಮನಾಳ್ ಗ್ರಾಮಗಳ ಗೌರಿಹಳ್ಳಿ ತೊರೆಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir **Latitude :** $13^0$26'00" **Longitude :** $75^0$49'30'' Power House-**Latitude :** $13^0$27'45" **Longitude :** $75^0$52'00") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ ಮತ್ತು ಯೋಜನೆಯ ವ್ಯಾಪ್ತಿಯಲ್ಲಿರುವ ವಿದ್ಯುತ್ ಸರಬರಾಜು ಕಂಪನಿಗಳೊಂದಿಗೆ ಪಿ.ಪಿ.ಎ. ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರೂ ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡೆಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ

ಪಿ.ಆರ್. 1242

## ಶಿಕ್ಷಣ ಸಚಿವಾಲಯ

**ವಿಷಯ** : ವೃತ್ತಿ ಶಿಕ್ಷಣ ಪರೀಕ್ಷಾ ಸಂಭಾವನೆ ಪರಿಷ್ಕರಣೆ ಬಗ್ಗೆ.

**ಓದಲಾಗಿದೆ** : 1) ದಿನಾಂಕ 21–12–2004ರ ಸರ್ಕಾರದ ಆದೇಶ ಸಂಖ್ಯೆ : ಇಡಿ 27 ಟಿವಿಇ 2004 (2)
2) ದಿನಾಂಕ 11–05–2009ರ ವೃತ್ತಿ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ : ಡಿವಿಇ/ ಪವಿ1/ ಪರಿಷ್ಕರಣೆ/ಸಂ:33/08–09,

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವೃತ್ತಿ ಶಿಕ್ಷಣ ಪರೀಕ್ಷೆಗಳ ಸಂಭಾವನೆಯನ್ನು ಅದರಲ್ಲಿ ನಮೂದಿಸಿದ ಷರತ್ತಿಗೊಳಪಟ್ಟು ಪರಿಷ್ಕರಿಸಲಾಗಿತ್ತು.

ಮೇಲೆ ಓದಲಾದ (2)ರ ಪತ್ರದಲ್ಲಿ, ನಿರ್ದೇಶಕರು, ವೃತ್ತಿ ಶಿಕ್ಷಣ ಇವರು, ವೃತ್ತಿ ಶಿಕ್ಷಣ ಕೋರ್ಸುಗಳಲ್ಲಿ ನಡೆಸಲಾಗುವ ಪರೀಕ್ಷೆಗಳಿಗೆ ಪರೀಕ್ಷಾ ಭತ್ಯೆ ಮತ್ತು ಸಂಭಾವನೆಗಳನ್ನು 2004ರಲ್ಲಿ ಪರಿಷ್ಕರಣೆಗೊಳಿಸಲಾಗಿದೆಯೆಂದು, ಇಲಾಖೆಯ ಮೌಲ್ಯಮಾಪಕರು ಹಾಗೂ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರಿಗೆ ಪರೀಕ್ಷಾ ಭತ್ಯೆ ಮತ್ತು ಸಂಭಾವನೆಯನ್ನು ಪದವಿ ಪೂರ್ವ ಶಿಕ್ಷಣದ ಪರೀಕ್ಷೆಗಳಿಗೆ ನೀಡುವ ಭತ್ಯೆ ಮತ್ತು ಸಂಭಾವನೆ ದರದಲ್ಲಿ ಪಾವತಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 62 ಟಿವಿಇ 2009, ಬೆಂಗಳೂರು, ದಿನಾಂಕ: 5ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ವೃತ್ತಿ ಶಿಕ್ಷಣ ಪರೀಕ್ಷೆಗಳ, ಪರೀಕ್ಷಾ ಸಂಭಾವನೆಯನ್ನು ಕೆಳಕಂಡ ಷರತ್ತಿಗೊಳಪಟ್ಟು ಪ್ರಸ್ತುತ ಜಾರಿಯಲ್ಲಿರುವ ಅಂದರೆ, ದಿನಾಂಕ 21–12–2004ರ ಆದೇಶದಲ್ಲಿ ನಿಗದಿಪಡಿಸಲಾದ ಸಂಭಾವನೆ ದರಗಳಿಗೆ ಶೇಕಡ 10 ರಷ್ಟು ಹೆಚ್ಚಿಸಿ ಪರಿಷ್ಕರಿಸಿ ಆದೇಶಿಸಿದೆ.

**ಷರತ್ತುಗಳು :**

1. No. new category of officials to be added as specified in the Government Order dated 21-12-2004
2. No additionality, no review, or revision to be sought for the next 5 years
3. The additional burden on account of above revision shall be met within the overall allocation of the department.

ಈ ಆದೇಶವನ್ನು ದಿನಾಂಕ 29–04–2010ರ ಟಿಪ್ಪಣಿ ಸಂಖ್ಯೆ : ಆಇ 1962 ವೆಚ್ಚ 8 2009ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

ಪಿ.ಆರ್. 1243

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ** : ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನಾ ವಿಭಾಗ ಹಾಗೂ ಯೋಜನಾ ಉಪ ವಿಭಾಗ ಕಚೇರಿಗಳ ಮತ್ತು ಅಧಿಕಾರಿ/ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ – ಆದೇಶ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 77 ಜಿಪಅ 2008, ದಿನಾಂಕ 4–9–2008
2) ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ದಿನಾಂಕ: 13–04–2010ರ ಪತ್ರ ಸಂಖ್ಯೆ:ಮುಇಂ/ಪಂರಾಇಂಇ/ಸಿ–5/2009–10.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 4–9–2008ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯ ಗ್ರಾಮೀಣ ರಸ್ತೆ ಅಭಿವೃದ್ಧಿ ಸಂಸ್ಥೆಯ ವತಿಯಿಂದ ಕರ್ನಾಟಕ ರಾಜ್ಯದಲ್ಲಿ ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಂಡು ವ್ಯವಸ್ಥಿತವಾಗಿ ಹಾಗೂ ಪರಿಣಾಮಕಾರಿಯಾಗಿ ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸುವ ಉದ್ದೇಶದಿಂದ ದಿನಾಂಕ 01–09–2008 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೀಮಿತಗೊಳಿಸಿ 19 ಯೋಜನಾ ಅನುಷ್ಠಾನ ಘಟಕಗಳನ್ನು (Project Implementation Units) ಅಂದರೆ ವಿಭಾಗೀಯ ಕಚೇರಿಗಳನ್ನು ತೆರೆಯಲು ಹಾಗೂ ಆಗ ಅಸ್ತಿತ್ವದಲ್ಲಿದ್ದ 26 ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನಾ ಉಪ ವಿಭಾಗಗಳ ಜೊತೆಗೆ 6 ಯೋಜನಾ ಉಪ ವಿಭಾಗಗಳನ್ನು ತೆರೆಯಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ದಿನಾಂಕ 13–04–2010ರ ಪತ್ರದ ಮೂಲಕ ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರು ಪ್ರಸ್ತಾಪನೆ ಸಲ್ಲಿಸಿ, ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 77 ಜಿಪಅ 2008, ದಿನಾಂಕ 4–9–2008ರಲ್ಲಿ ಮಂಜೂರಾತಿ ನೀಡಿರುವ 19 ಯೋಜನಾ ವಿಭಾಗಗಳ ಕಚೇರಿಗಳನ್ನು ಹಾಗೂ 32 ಯೋಜನಾ ಉಪ ವಿಭಾಗಗಳ ಕಚೇರಿಗಳನ್ನು ಮತ್ತು ಸದರಿ ಕಚೇರಿಗಳಿಗೆ ಮಂಜೂರಾತಿ ನೀಡಿರುವ ವಿವಿಧ ವೃಂದಗಳ ಅಧಿಕಾರಿ / ಸಿಬ್ಬಂದಿಗಳ ಹುದ್ದೆಗಳನ್ನು ಮತ್ತೆ ದಿನಾಂಕ 1–9–2009 ರಿಂದ 30–08–2012ರವರೆಗೆ ಮುಂದುವರೆಸುವುದು ಅಗತ್ಯವಿದೆಯೆಂದು ಪ್ರಸ್ತಾಪಿಸಿ, ಅದರಂತೆ ಮುಂದುವರೆಸಿ ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಗ್ರಾಅಪ 100 ಜಿಪಅ 2010, ಬೆಂಗಳೂರು, ದಿನಾಂಕ: 7ನೇ ಮೇ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ 4-9-2008ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾದ 19 ಯೋಜನಾ ವಿಭಾಗಗಳ ಕಚೇರಿಗಳನ್ನು ಹಾಗೂ 32 ಯೋಜನಾ ಉಪ ವಿಭಾಗಗಳ ಕಚೇರಿಗಳನ್ನು ಮತ್ತು ಸದರಿ ಕಚೇರಿಗಳಿಗೆ ಮಂಜೂರು ಮಾಡಿರುವ ವಿವಿಧ ವೃಂದಗಳ ಅಧಿಕಾರಿ/ಸಿಬ್ಬಂದಿಗಳ ಹುದ್ದೆಗಳನ್ನು ಮತ್ತೆ ದಿನಾಂಕ 1-9-2009ರಿಂದ ಒಂದು ವರ್ಷದ ಅವಧಿಗೆ ಮಾತ್ರ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರಿ ಅದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಸಿ 96, ದಿನಾಂಕ 10-07-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಂಭುಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ), (ಸೇವೆಗಳು-ಎ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಪಿ.ಆರ್. 1244

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಇವರು ಕೆ.ಸಿ.ಎಸ್.ಆರ್.(ಸಿಸಿಎ) ನಿಯಮಾವಳಿಗಳು 1957ರ ನಿಯಮ 18ರಡಿ ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 64 ಎಡಿಇ 2000, ದಿನಾಂಕ : 11-03-2005.
2. ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಇವರು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಿರುವ ಮೇಲ್ಮನವಿ ದಿನಾಂಕ : 13-02-2006.

**ಪ್ರಸ್ತಾವನೆ:**

ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಪ್ರಸ್ತುತ ವಿಶೇಷ ತಹಶೀಲ್ದಾರ್, ಬಿ.ಎಂ.ಟಿ.ಎಫ್. ಬೆಂಗಳೂರು ಇವರು ಕೆ.ಸಿ.ಎಸ್.(ಸಿಸಿಎ) ನಿಯಮಾವಳಿಗಳು 1957ರ ನಿಯಮ 18(2)(ಬಿ) ರಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 64 ಎಡಿಇ 2000, ದಿನಾಂಕ : 11-03-2005ರ ವಿರುದ್ಧ ಮೇಲ್ಮನವಿ ಸಲ್ಲಿಸಿರುತ್ತಾರೆ. ಮೇಲ್ಮನವಿ ಪ್ರಕರಣದ ವಿವರಗಳು ಈ ಕೆಳಕಂಡಂತೆ ಇದೆ.

ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದೆ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಕರ್ತವ್ಯ ಲೋಪ ದುರ್ನಡತೆ ದುರುಪಯೋಗ ಪಡಿಸಿಕೊಂಡಿರುವ ಬಗ್ಗೆ ಈ ಕೆಳಕಂಡ ಆರೋಪಗಳನ್ನು ಮಾಡಲಾಗಿದೆ.

ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ವಿಶೇಷ ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಕಛೇರಿ, (ಪ್ರಸ್ತುತ ತಹಶೀಲ್ದಾರ್, ಬಿ.ಎಂ.ಟಿ.ಎಫ್., ಬೆಂಗಳೂರು) ಇವರು ಸದರಿ ತಾಲ್ಲೂಕಿನ ಸಿಂಗನಾಯಕನಹಳ್ಳಿ ಗ್ರಾಮದ ಸ.ನಂ. 111ರಲ್ಲಿ ಒಟ್ಟು 76 ಎಕರೆ ಸರ್ಕಾರಿ ಮುಫತ್ ಜಮೀನಿದ್ದು, ಸದರಿ ಜಮೀನಿನಲ್ಲಿ 10 ಎಕರೆ ಜಮೀನನ್ನು ಶ್ರೀ ಎ. ರಾಮಯ್ಯ ಎನ್ನುವರು ಸೃಷ್ಟಿತ ದಾಖಲೆಗಳ ಆಧಾರದ ಮೇಲೆ ಕ್ರಯ ಪತ್ರ ಸಂ : 1969/96-97, ದಿನಾಂಕ : 01-08-96ರಂದು ಶ್ರೀ ಸಿ.ಆರ್. ಗೋವಿಂದ ರೆಡ್ಡಿ ಬಿನ್ ಸಿ. ನಾರಾಯಣ ರೆಡ್ಡಿ ಎಂಬುವವರಿಗೆ 5 ಎಕರೆ ಮತ್ತು ಕ್ರಯ ಪತ್ರ ಸಂ : 1970/96-97 ದಿನಾಂಕ : 01-08-96ರಂದು ಶ್ರೀ ಸಿ.ಆರ್. ಗೋವಿಂದ ರೆಡ್ಡಿಯವರಿಗೆ 5 ಎಕರೆ ಜಮೀನನ್ನು ಮಾರಾಟ ಮಾಡಿದ್ದು, ಈ ರೀತಿ ಸೃಷ್ಟಿತ ದಾಖಲೆಗಳ ಆಧಾರದ ಮೇಲೆ ನೋಂದಣಿಯಾದ ಜಮೀನನ್ನು ಕ್ರಮವಾಗಿ ಎಂ.ಆರ್. 38/95-96 ಮತ್ತು ಎಂ.ಆರ್.-39/95-96 ರಂತೆ, ಶ್ರೀ ಸಿ.ಆರ್. ಗೋವಿಂದ ರೆಡ್ಡಿ ಇವರ ಹೆಸರಿಗೆ ಖಾತೆ ಮಾಡಲು ಶಿಫಾರಸ್ಸು ಮಾಡಿ ಸರ್ಕಾರದ ಜಮೀನನ್ನು ಖಾಸಗಿ ವ್ಯಕ್ತಿಗಳ ಹೆಸರಿಗೆ ವರ್ಗಾಯಿಸಲು ಕಾರಣರಾಗಿದ್ದಾರೆಂಬ ಆರೋಪದ ಮೇಲೆ ಇತರರೊಂದಿಗೆ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರು ಕರ್ತವ್ಯ ಲೋಪ ಎಸಗಿರುವರೆಂದು ಆರೋಪಿಸಲಾಗಿತ್ತು.

ಅದರಂತೆ, ಸರ್ಕಾರದ ಆದೇಶ ಸಂ : ಆರ್‌ಡಿ 64 ಎಡಿಇ 2000, ದಿನಾಂಕ : 13-09-2002ರ ಆದೇಶದಲ್ಲಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ಇವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಶ್ರೀ ಎನ್.ಎಸ್.ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣಾ ವರದಿಯಲ್ಲಿ ಆರೋಪಿತರ ವಿರುದ್ಧ ಆರೋಪಗಳು ಸಾಬೀತಾಗಿರುತ್ತದೆ ಎಂದು ವಿಚಾರಣಾಧಿಕಾರಿಗಳು ವರದಿ

ನೀಡಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಪರಿಶೀಲಿಸಿ ಆರೋಪಿತರು ಕರ್ತವ್ಯ ಚ್ಯುತಿ ಎಸಗಿರುವುದು ಸಾಬೀತಾಗಿರುವ ಹಿನ್ನೆಲೆಯಲ್ಲಿ ಇವರಿಗೆ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ರಹಿತವಾಗಿ ತಡೆಹಿಯುವ ದಂಡನೆಯನ್ನು ವಿಧಿಸಿ ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ : 11–03–2005ರ ಆದೇಶದಲ್ಲಿ ಆದೇಶಿಸಲಾಗಿತ್ತು.

ಸರ್ಕಾರದ ಆದೇಶದ ವಿರುದ್ಧ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 18ರಡಿಯಲ್ಲಿ ಗೌರವಾನ್ವಿತ ರಾಜ್ಯಪಾಲರಿಗೆ ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ : 21–04–2005ರಂದು ಮೇಲ್ಮನವಿ ಸಲ್ಲಿಸಿ, ಸರ್ಕಾರವು ಅವರಿಗೆ ವಿಧಿಸಿರುವ ದಂಡನಾದೇಶವನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ. ಸದರಿ ಮೇಲ್ಮನವಿಯನ್ನು ಪರಿಶೀಲಿಸಲು ಘನತೆವೆತ್ತ ರಾಜ್ಯಪಾಲರಿಗೆ ಮಂಡಿಸುವಂತೆ ದಿನಾಂಕ : 13–02–2006ರ ಪತ್ರದಲ್ಲಿ ಘನತೆವೆತ್ತ ರಾಜ್ಯಪಾಲರ ಸಚಿವಾಲಯವು ಸೂಚಿಸಿದನ್ವಯ, ಮೇಲ್ಮನವಿಯಲ್ಲಿನ ಅಂಶಗಳು ಮತ್ತು ಕಂಡಿಕೆವಾರು ಷರಾಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ನಿವೇದನಾ ಟಿಪ್ಪಣಿಯೊಂದಿಗೆ ಪ್ರಸ್ತಾವನೆಯನ್ನು ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಲಾಗಿರುತ್ತದೆ. ಸದರಿ ಮೇಲ್ಮನವಿಗೆ ಸಂಬಂಧಿಸಿದಂತೆ, ಘನತೆವೆತ್ತ ರಾಜ್ಯಪಾಲರು ಕೆಳಕಂಡಂತೆ ಆದೇಶಿಸಿರುತ್ತಾರೆ.

I have considered the appeal petition submitted under rule 18 of KCS (CC & A) Rules 1957 by Smt. K.H. Bhagyavathamma, Special Tahsildar, Khadi Board, Bangalore (former Special Tahsildar, Bangalore North Taluk (Additional) against the Government Order No. ಕಂಇ 64 ಎಡಿಇ 2000, dated 11th March 2005 imposing the penalty of withholding of 2 (two) annual increments without cumulative effect, in the light of the contentions raised in the appeal petition and on perusal of the connected enquiry and appeal records.

The changes framed against the AGO that while working as Special Tahsildar, Bangalore North Taluk (Additional) Bangalore, She had approved the transfer of Katha of Government Mufath Kaval land in Sy.No. 111 of Singanayakanahalli of Bangalore North Taluk, in favour of private individuals without verification and scrutiny of the original records and documents, and rendered herself responsible for allowing private individuals to encroach the Government land, have been proved.

The contentions of the appellant that the registered sale deeds were legal, that necessary transfer of property was effected based on remarks of Village Accountant, and that the higher authorities did not cancel the alleged transactions etc., do not merit consideration.

The penalty imposed is mild compared to the gravity of the charges held proved in the inquiry. In the circumstances, after duly considering the entire matter I dismiss the appeal petition and uphold the orders of the Disciplinary Authority.

H.R. Bhardwaj
Governor Of Karnataka

ಆದುದರಿಂದ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 52 ಎಡಿಇ 2005, ಬೆಂಗಳೂರು, ದಿನಾಂಕ : 30–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 64 ಎಡಿಇ 2000, ದಿನಾಂಕ : 11–03–2005ರಲ್ಲಿ ವಿಧಿಸಿರುವ ಆದೇಶವನ್ನು ಘನತೆವೆತ್ತ ರಾಜ್ಯಪಾಲರು ಸ್ಥಿರೀಕರಿಸಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ, ವಿಶೇಷ ತಹಶೀಲ್ದಾರ್, ಬಿ.ಎಂ.ಟಿ.ಎಫ್., ಬೆಂಗಳೂರು ಇವರು ದಿನಾಂಕ : 21–04–2005ರ ಮೇಲ್ಮನವಿಯನ್ನು ವಜಾಗೊಳಿಸಿರುವುದರಿಂದ ಮೇಲ್ಮನವಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1245

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು–ಆರೋಪದಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ ಇವರ ಪತ್ರ ಸಂಖ್ಯೆ : ಸಿಬ್ಬಂದಿ (1) : ವಿವ : 110/2004–05, ದಿನಾಂಕ : 20–12–2005 ಮತ್ತು 08–05–2006.
2. ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್ ಇವರಿಗೆ ನೀಡಿದ ಕಾರಣ ಕೇಳುವ ದಿನಾಂಕ : 03–02–2007.
3. ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ತಹಶೀಲ್ದಾರ್, ಇವರ ಲಿಖಿತ ಉತ್ತರ ದಿನಾಂಕ : 17–08–2007.
4. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 47 ಎಡಿಇ 2004, ದಿನಾಂಕ : 19–05–2008
5. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 47 ಎಡಿಇ 2004, ದಿನಾಂಕ : 08–07–2008
6. ಶ್ರೀ ನಾಗೇಂದ್ರಕುಮಾರ್, ನಿವೃತ್ತ ಮತ್ತು ಸೆಷನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳ ವರದಿ ದಿನಾಂಕ : 27–07–2009.

**ಪ್ರಸ್ತಾವನೆ:**

ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ : 15–01–2004 ರಿಂದ 31–01–2004ರ ವರೆಗೆ ಪರಿವರ್ತಿತ ರಜೆಯ ಮೇಲೆ ತೆರಳಿದ್ದು ದಿನಾಂಕ : 01–02–2004 ರಂದು ಕರ್ತವ್ಯಕ್ಕೆ ಹಾಜರಾಗದೆ ಗೈರು ಹಾಜರಿ ಆಗಿರುವುದಾಗಿ ಹಾಗೂ ಸಾರ್ವಜನಿಕ ಕೆಲಸಗಳನ್ನು ಸಮರ್ಪಕವಾಗಿ ನಿರ್ವಹಿಸದೆ, ಕರ್ತವ್ಯ ಲೋಪ ಮತ್ತು ದುರ್ನಡತೆ ವ್ಯಕ್ತಪಡಿಸಿದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿ 1966ರ ನಿಯಮ 3(i) (ii) (iii)ನ್ನು ಉಲ್ಲಂಘಿಸಿರುತ್ತಾರೆಂದು ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಮೇಲೆ ಓದಲಾದ ಕ್ರ.ಸಂ. (1) ದಿನಾಂಕ : 20–12–2005ರಲ್ಲಿ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ದೋಷಾರೋಪಣೆಯನ್ನು (ಅನುಬಂಧ–1 ರಿಂದ 4ರವರೆಗೆ) ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ : 03–02–2007 ಕಾರಣ ಕೇಳುವ ನೋಟೀಸು ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಶ್ರೀಮತಿ ಕೆ.ಹೆಚ್. ಭಾಗ್ಯವತಮ್ಮ ಇವರು ತಮ್ಮ ಲಿಖಿತ ಉತ್ತರ ಸಲ್ಲಿಸಿ ಆರೋಪಗಳನ್ನು ಅಲ್ಲಗೆಳೆಯುತ್ತಾ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿರುತ್ತಾರೆ.

ಆರೋಪಿತರ ವಿರುದ್ಧ ಆರೋಪಗಳು ಹಾಗು ಅವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖೆ ವಿಚಾರಣೆಯನ್ನು ಜರುಗಿಸಲು ಶ್ರೀ ಕೆ.ಎನ್. ನಾಗೇಂದ್ರಕುಮಾರ್, ನಿವೃತ್ತ ಜಿಲ್ಲಾ ಹಾಗೂ ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ತುಮಕೂರು ಜಿಲ್ಲಾಧಿಕಾರಿಗಳ ಕಛೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರ.ಸಂ. (4)ರಲ್ಲಿ ನೇಮಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಮತ್ತು 11–ಎ ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ, ಇಲಾಖಾ ವಿಚಾರಣೆ ಜರುಗಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ, ತಿಳಿಸಿ ಆದೇಶಿಸಲಾಗಿತ್ತು. ದಿನಾಂಕ : 24–05–2008ರಲ್ಲಿ ವಿಚಾರಣಾಧಿಕಾರಿಗಳು ಮನವಿಯನ್ನು ಸಲ್ಲಿಸಿ, ಬೆಂಗಳೂರಿನಿಂದ ತುಮಕೂರಿಗೆ ಹೋಗಿ ಬರಲು ತೊಂದರೆಯಾಗುತ್ತದೆ ಎಂದು ತಿಳಿಸಿ ವಿಚಾರಣೆಯನ್ನು ತುಮಕೂರು ಬದಲು ಬೆಂಗಳೂರಿನಲ್ಲಿ ನಡೆಸಲು ಸೂಕ್ತ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಸದರಿಯವರ ಮನವಿಯನ್ನು ಪರಿಶೀಲಸಿ, ಮೇಲೆ ಓದಲಾದ ಕ್ರ.ಸಂ. (5)ರಲ್ಲಿ ವಿಚಾರಣೆಯನ್ನು ನಡೆಸಲು ನಿಗದಿಯಾಗಿದ್ದ ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಗೆ ಬದಲು ಬೆಂಗಳೂರು ಜಿಲ್ಲಾಧಿಕಾರಿಗಳ ಕಛೇರಿಗೆ ಸ್ಥಳ ಬದಲಾವಣೆ ಮಾಡಿ ಆದೇಶಿಸಿತ್ತು.

ಮೇಲೆ ಓದಲಾದ ಕ್ರ. ಸಂ. (6) ರಲ್ಲಿ ವಿಚಾರಣಾಧಿಕಾರಿಗಳಾದ ಶ್ರೀ ಕೆ. ಎನ್. ನಾಗೇಂದ್ರ ಕುಮಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರು ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯ ವಿರುದ್ಧ ಆರೋಪಿಸಲಾದ (1) ಅನಧಿಕೃತ ಗೈರು ಹಾಜರಾಗಿರುವುದರ ಕುರಿತು, (2) ಸಾರ್ವಜನಿಕರೊಂದಿಗೆ ಹಾಗೂ ಸಿಬ್ಬಂದಿ ವರ್ಗದವರೊಂದಿಗೆ ಸೌಹಾರ್ದಯುತವಾಗಿ

ನಡೆದುಕೊಳ್ಳದೇ ಇರುವುದರ ಬಗ್ಗೆ, (3) ನ್ಯಾಯಬೆಲೆ ಅಂಗಡಿ, ಸಗಟು ವ್ಯಾಪರ ಮಳಿಗೆ ತಪಾಸಣೆ ಮತ್ತು ಬರ ಪರಿಹಾರ ಕಾಮಗಾರಿಗಳ ತಪಾಸಣೆ ಮಾಡದೇ ಕರ್ತವ್ಯ ಲೋಪ ಎಸಗಿರುವ ಕುರಿತು, (4) ಭೂ ಕಂದಾಯ ವಸೂಲಿ ಮಾಡದಿರುವ ಕುರಿತು, (5) ಸಾರ್ವಜನಿಕರ ಕುಂದುಕೊರತೆಗಳ ಪ್ರಕರಣಗಳ ವಿಲೇವಾರಿ ಮಾಡುವಲ್ಲಿ ವಿಫಲರಾಗಿರುವ ಕುರಿತು ಈ ಕೆಳಕಂಡಂತೆ ವರದಿ ಮಾಡಿರುತ್ತಾರೆ.

ಆಪಾದಿತರ ಅಧಿಕಾರಿಯು ವೈದ್ಯಕೀಯ ಕಾರಣದ ಮೇಲೆ ರಜೆಯಲ್ಲಿ ಇದ್ದುದರಿಂದ ಅದನ್ನು ಗೈರು ಹಾಜರಿಯೆಂದು ಪರಿಗಣಿಸಲು ಬರುವುದಿಲ್ಲವೆಂದು ಅಭಿಪ್ರಾಯ ನೀಡಿದ್ದಾರೆ. ಆಪಾದಿತ ಅಧಿಕಾರಿಯು ಸಿಬ್ಬಂದಿಯೊಂದಿಗೆ ಹಾಗೂ ಸಾರ್ವಜನಿಕರೊಂದಿಗೆ ಸೌಹಾರ್ದಯುತವಾಗಿದ್ದರೆಂಬುದು ಸಾಕ್ಷಿಗಳಿಂದ ತೋರುತ್ತದೆಂದು ತಿಳಿಸಿದ್ದಾರೆ. ಆಪಾದಿತ ಅಧಿಕಾರಿಯು ಆಹಾರ ನಿರೀಕ್ಷಕರು ಹಾಗೂ ಆಹಾರ ಶಿರಸ್ತೇದಾರರ ಸಹಕಾರದಲ್ಲಿ ತನಿಖೆ ಮಾಡಿರುವುದಾಗಿ ಸಾಕ್ಷಿದಾರರು ಹೇಳಿಕೆ ನೀಡಿರುವುದರಿಂದ ಈ ಆಪಾದನೆ ಸಹ ಸಾಬೀತಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಆಪಾದಿತ ಅಧಿಕಾರಿಯು ಮಾಸಿಕ ಸಭೆಗಳನ್ನು ನಡೆಸಿ ಗ್ರಾಮ ಲೆಕ್ಕಿಗರ ಹಾಗೂ ಕಂದಾಯ ನಿರೀಕ್ಷಕರುಗಳಿಗೆ ಬೇಡಿಕೆಯನುಸಾರ ಭೂ ಕಂದಾಯ ವಸೂಲಾತಿಯ ಬಗ್ಗೆ ಗುರಿ ನಿಗದಿಪಡಿಸುತ್ತಿದ್ದರೆಂದು ಸಾಕ್ಷಿದಾರರು ಹೇಳಿರುವುದರಿಂದ ಈ ಆಪಾದನೆ ಸಾಬೀತಾಗಿಲ್ಲವೆಂದು ತಿಳಿಸಿದ್ದಾರೆ. ಒಟ್ಟಿನಲ್ಲಿ ಆಪಾದಿತರ ವಿರುದ್ಧದ ಎಲ್ಲಾ 5 ಆರೋಪಗಳು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯ ನೀಡಿರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಸದರಿ ಆಪಾದಿತ ಅಧಿಕಾರಿಯ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯಿಂದ ಕೈಬಿಡಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.: ಆರ್‌ಡಿ 47 ಎಡಿಇ 2004, ಬೆಂಗಳೂರು, ದಿನಾಂಕ : 29-04-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀಮತಿ ಕೆ. ಹೆಚ್. ಭಾಗ್ಯವತಮ್ಮ, ಹಿಂದಿನ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಿ, ವಿಚಾರಣಾಧಿಕಾರಿಗಳು ಆಪಾದಿತ ಅಧಿಕಾರಿ ವಿರುದ್ಧ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುವುದರಿಂದ ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ, ಇವರ ವಿರುದ್ಧ ಹೂಡಲಾಗಿದ್ದ ಇಲಾಖಾ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1246

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ(ಸೇವೆಗಳು-3)

## COMMERCE AND INDUSTRIES SECRETARIAT

**SUB :** Approval to the proposal of M/s. ICI India Ltd., for change of name.

**READ :** 1. Govt. Order No : CI 266 SPI 2009, dated : 30-10-2009.
2. Proceedings of the 21st State High Level Clearance Committee (SHLCC) meeting held on 29-03-2010.

**PREAMBLE:**

In the 19th SHLCC meeting held on 31-08-2009, the proposal of M/s. ICI India Ltd., to establish a unit for manufacture of "Paints and Varnishes" in 70 acres of land to be acquired and allotted by KIADB at Thandya Industrial Area, Mysore District, [Plot next to Flair Garments or behind ITC] with an investment of Rs. 253 crores, generating employment to about 159 persons was approved and G.O. read at (1) above has been issued.

In the 21st State High Level Clearance Committee (SHLCC) meeting held on 29-03-2010, the Committee approved the request of the company for change of name from M/s. ICI India Ltd., to M/s. Akzo Nobel India Ltd.

Hence the following Order :-

**GOVERNMENT ORDER NO. CI 266 SPI 2009, BANGALORE, DATED 10-05-2010**

Government is pleased to accord approval to the change of name from M/s. ICI India Ltd., to M/s. Akzo Nobel India Ltd. For implementing "Paints and Varnishes" project.

By Order and in the name of the Governor of Karnataka,

**(APARNA PAVATE)**
Desk Officer (Technical Cell),
Commerce & Industries Department.

P.R.No. 1273

